## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 639
ಸದಸ್ಯರ ಹೆಸರು : ಶ್ರೀ ಎಂ.ನಾರಾಯಣಸ್ವಾಮಿ
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 05.03.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಡಿಸೆಂಬರ್‌ನಲ್ಲಿ ಸಾರಿಗೆ ನೌಕರರ ಮುಷ್ಕರದ ಸಮಯದಲ್ಲಿ ಸರ್ಕಾರವು ಅವರ 10 ಬೇಡಿಕೆಗಳಲ್ಲಿ 09 ಬೇಡಿಕೆಗಳನ್ನು ಈಡೇರಿಸುವುದಾಗಿ ಆಶ್ವಾಸನೆ ನೀಡಲಾಗಿದ್ದು, ಈ ಬೇಡಿಕೆಗಳಲ್ಲಿ ಇದುವರೆವಿಗೂ ಎಷ್ಟು ಬೇಡಿಕೆಗಳನ್ನು ಈಡೇರಿಸಲಾಗಿದೆ; | ಸಾರಿಗೆ ನೌಕರರ ಮುಷ್ಕರದ ಸಮಯದಲ್ಲಿ ಆಶ್ವಾಸನೆ ನೀಡಲಾಗಿದ್ದ 09 ಬೇಡಿಕೆಗಳ ಕುರಿತಂತೆ ಕೈಗೊಂಡ ಕ್ರಮಗಳ ಬೇಡಿಕೆವಾರು ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ) | ಫೆಬ್ರವರಿ ತಿಂಗಳಲ್ಲಿ ಸಾರಿಗೆ ನೌಕರರು ಪ್ರತಿಭಟನೆ ಮಾಡಿರುವುದರ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಫೆಬ್ರವರಿ ತಿಂಗಳಲ್ಲಿ ಬೆಂ.ಮ.ಸಾ.ಸಂಸ್ಥೆಯ ನೌಕರರು ಪ್ರತಿಭಟನೆ ಮಾಡಿರುವುದರ ಕುರಿತು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಸಾರಿಗೆ ನೌಕರರಿಗೆ ನೀಡಬೇಕಾದ ಬಾಕಿ ವೇತನದ ಮೊತ್ತವೆಷ್ಟು; | ನಾಲ್ಕು ಸಾರಿಗೆ ಸಂಸ್ಥೆಗಳ ನೌಕರರಿಗೆ ಪಾವತಿಸಬೇಕಾದ ಜನವರಿ 2021 ರವರೆಗೆ ಪೂರ್ಣ ವೇತನವನ್ನು ಪಾವತಿ ಮಾಡಿದ್ದು, ಯಾವುದೇ ಬಾಕಿ ಇರುವುದಿಲ್ಲ. |
| ಈ) | ಬಾಕಿ ವೇತನವನ್ನು ಸಂಪೂರ್ಣವಾಗಿ ನೀಡಲಾಗಿದೆಯೇ? (ಸಂಪೂರ್ಣ ಮಾಹಿತಿ ನೀಡುವುದು) | |

ಸಂಖ್ಯೆ: ಟಿಡಿ 59 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಅನುಬಂಧ

ದಿನಾಂಕ.13.12.2020ರಂದು ಮಾನ್ಯ ಉಪಮುಖ್ಯಮಂತ್ರಿಗಳು ಮತ್ತು ಸಾರಿಗೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಂಧಾನ ಸಭೆಯಲ್ಲಿ ಚರ್ಚಿಸಿದ 9 ಬೇಡಿಕೆಗಳ ಕುರಿತು ತೆಗೆದುಕೊಂಡ ಕ್ರಮಗಳು:

| ಕ್ರಮ ಸಂಖ್ಯೆ | ಬೇಡಿಕೆ | ತೆಗೆದುಕೊಂಡ ಕ್ರಮಗಳು |
|---|---|---|
| 1. | ನಿಗಮದ ನೌಕರರಿಗೆ 'ಆರೋಗ್ಯ ಭಾಗ್ಯ' ವಿಮಾ ಯೋಜನೆಯನ್ನು ಅಳವಡಿಸುವುದು. | ಸರ್ಕಾರಿ ನೌಕರರಿಗೆ ನೀಡುವಂತೆ ಚಿಕಿತ್ಸೆ ಪಡೆದ ಆಸ್ಪತ್ರೆಯ ದರ್ಜೆಗೆ ಅನುಗುಣವಾಗಿ ಅಂದರೆ, ಎನ್.ಎ.ಬಿ.ಹೆಚ್ ದರ್ಜೆಯ ಖಾಸಗಿ ಆಸ್ಪತ್ರೆ ಆಗಿದ್ದಲ್ಲಿ ಸಿ.ಜಿ.ಹೆಚ್.ಎಸ್-2014 ಎನ್.ಎ.ಬಿ.ಹೆಚ್ ದರದಲ್ಲಿ ಮತ್ತು ನಾನ್ ಎನ್.ಎ.ಬಿ.ಹೆಚ್ ದರ್ಜೆಯ ಆಸ್ಪತ್ರೆ ಆಗಿದ್ದಲ್ಲಿ ಸಿ.ಜಿ.ಹೆಚ್.ಎಸ್-2014 ನಾನ್-ಎನ್.ಎ.ಬಿ.ಹೆಚ್ ದರದಲ್ಲಿ ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಆದೇಶ ಹೊರಡಿಸಲಾಗಿದೆ.<br><br>ಮುಂದುವರೆದು, ಸರ್ಕಾರಿ ನೌಕರರ ವೈದ್ಯಕೀಯ ವೆಚ್ಚದ ಕುರಿತು ಮುಂದಿನ ದಿನಗಳಲ್ಲಿ ಸರ್ಕಾರವು ಜಾರಿಗೊಳಿಸಬಹುದಾದ ಯೋಜನೆಯನ್ನು ಸಾರಿಗೆ ಸಂಸ್ಥೆಗಳಲ್ಲಿ ಜಾರಿಗೆ ತರಲು ಪರಿಶೀಲಿಸಲಾಗುವುದು. |
| 2. | ಕೋವಿಡ್-19 ಸೋಂಕು ತಗುಲಿದ ನಿಗಮದ ನೌಕರರು ಮರಣ ಹೊಂದಿದ ಸಂದರ್ಭದಲ್ಲಿ ಅವರ ಕುಟುಂಬಗಳಿಗೆ ಸರ್ಕಾರಿ ನೌಕರರಿಗೆ ನೀಡಿದಂತೆ ರೂ.30.00 ಲಕ್ಷ ಪರಿಹಾರ ನೀಡುವುದು. | ಕೋವಿಡ್-19 ಸಾಂಕ್ರಾಮಿಕ ರೋಗಕ್ಕೆ ತುತ್ತಾಗಿ ಮೃತಪಟ್ಟ 7 (ಏಳು) ನೌಕರರ ಅವಲಂಬಿತ ಕುಟುಂಬದವರಿಗೆ ದಿನಾಂಕ.26.02.2021 ರಂದು ತಲಾ ರೂ.30.00 ಲಕ್ಷಗಳ ಪರಿಹಾರದ ಚೆಕ್ಕನ್ನು ನೀಡಲಾಗಿದೆ.<br><br>ಉಳಿದ ಮೃತ ನೌಕರರ ಕ್ಲೈಮ್‌ಗಳನ್ನು ನಿಯಮಾನುಸಾರ ಪರಿಶೀಲಿಸಿ, ಅರ್ಹ ಪ್ರಕರಣಗಳಲ್ಲಿ ಪರಿಹಾರವನ್ನು ಮಂಜೂರು ಮಾಡಲು ಕ್ರಮ ವಹಿಸಲಾಗುತ್ತಿದೆ. |
| 3. | ಅಂತರ್‌ನಿಗಮ ವರ್ಗಾವಣೆ ಕುರಿತು ಸೂಕ್ತ ನೀತಿ ರಚಿಸುವುದು. | "ಅಂತರ ನಿಗಮ ವರ್ಗಾವಣೆ ನೀತಿ"ಯ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| 4. | ತರಬೇತಿಯಲ್ಲಿರುವ ನೌಕರರ ತರಬೇತಿ ಅವಧಿಯನ್ನು 02 ವರ್ಷದಿಂದ 01 ವರ್ಷಕ್ಕೆ ಇಳಿಸುವುದು. | ತರಬೇತಿಯಲ್ಲಿರುವ ನೌಕರರ ತರಬೇತಿ ಅವಧಿಯನ್ನು ಎರಡು ವರ್ಷಗಳಿಂದ ಒಂದು ವರ್ಷಕ್ಕೆ ಕಡಿಮೆಗೊಳಿಸುವ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| 5. | ನಿಗಮದಲ್ಲಿ ಹೆಚ್.ಆರ್.ಎಂ.ಎಸ್ (ಮಾನವ ಸಂಪನ್ಮೂಲ) ವ್ಯವಸ್ಥೆಯನ್ನು ಜಾರಿಗೊಳಿಸುವುದು. | ಹೆಚ್.ಆರ್.ಎಂ.ಎಸ್ ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ. ಈ ಪದ್ಧತಿಯಡಿ ಇನ್ನಷ್ಟು ಅಂಶಗಳನ್ನು ಸೇರಿಸಿ ಅಭಿವೃದ್ಧಿ ಪಡಿಸಲಾಗುತ್ತಿದೆ. |
| 6. | ಸಿಬ್ಬಂದಿಯು ಕರ್ತವ್ಯ ನಿರ್ವಹಿಸಿದ ಸಂದರ್ಭದಲ್ಲಿ ಭತ್ಯೆಯನ್ನು (ಬಾಟಾ) ನೀಡುವುದು. | ಸಿಬ್ಬಂದಿಗಳು ಅವರ ದಿನದ ಕರ್ತವ್ಯದ ಸಲುವಾಗಿ ಅರ್ಹ ಭತ್ಯೆ ಮತ್ತು ಬಾಟಾಗಳನ್ನು ಹಾಗೂ ಮಾಸಿಕ ಭತ್ಯೆಗಳನ್ನು ನೀಡಲು ಆದೇಶ ಹೊರಡಿಸಲಾಗಿರುತ್ತದೆ. |

| | | |
|---|---|---|
| 7. | ಘಟಕದ ವ್ಯಾಪ್ತಿಯಲ್ಲಿ ನೌಕರರಿಗೆ ಕಿರುಕುಳ ತಪ್ಪಿಸಲು ಸೂಕ್ತ ಆಡಳಿತ ವ್ಯವಸ್ಥೆಯನ್ನು ರೂಪಿಸುವುದು. | 1. ಚಾಲಕ ನಿರ್ವಾಹಕರಿಗೆ ಅನುಸೂಚಿಗಳ ನಿಗದಿ ವಿಚಾರದಲ್ಲಿ ಏಕರೀತಿಯ ಅಂಶಗಳನ್ನು ಅನುಸರಿಸಲು ಸಿಇಟಿ ಮಾದರಿಯಲ್ಲಿ ಕರ್ತವ್ಯ ನಿಯೋಜನೆಯ ಪದ್ಧತಿಯನ್ನು ದಿನಾಂಕ:-01.02.2021 ರಿಂದ ಎಲ್ಲಾ ಸಾರಿಗೆ ನಿಗಮಗಳಲ್ಲಿ ಜಾರಿಗೆ ತರಲಾಗಿದೆ.<br>2. ನೌಕರರಿಗೆ ರಜಾ ಮಂಜೂರಾತಿ ಕುರಿತಂತೆ ಪಾರದರ್ಶಕ ಮತ್ತು ತಂತ್ರಾಂಶ ಆಧಾರಿತ ರಜಾ ನಿರ್ವಹಣಾ ವ್ಯವಸ್ಥೆ ಜಾರಿಗೆ ತರಲಾಗಿದೆ. ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸಲು ನಿರ್ದೇಶನಗಳನ್ನು ನೀಡಿದ್ದು, ಅದರಂತೆ ಕ್ರಮ ಜಾರಿಯಲ್ಲಿದೆ.<br>3. ನೌಕರರ ಸೇವಾ ಸಂಬಂಧಿತ ಕುಂದುಕೊರತೆ/ಸಮಸ್ಯೆಗಳನ್ನು ಪರಿಶೀಲಿಸಿ, ಬಗೆಹರಿಸುವ ಪದ್ಧತಿ ಜಾರಿಯಲ್ಲಿದ್ದು, ಅದನ್ನು ಕಟ್ಟುನಿಟ್ಟಾಗಿ/ಪರಿಣಾಮಕಾರಿಯಾಗಿ ನಿರ್ವಹಿಸಲಾಗುತ್ತಿದೆ.<br>ಅದರಂತೆ ವಿಭಾಗಗಳ ಅಧಿಕಾರಿಗಳ ತಂಡವು ಘಟಕಗಳಿಗೆ ಭೇಟಿ ನೀಡಿ ನೌಕರರ ಕುಂದುಕೊರತೆಗಳನ್ನು ಪಡೆದು, ಪರಿಶೀಲಿಸಿ ಬಗೆಹರಿಸುವ ಪದ್ಧತಿ ನಿರಂತರವಾಗಿ ನಡೆಯುತ್ತಿದೆ.<br>4. ಅಲ್ಲದೇ, HRMS ತಂತ್ರಾಂಶ ಆಧಾರಿತ ಕುಂದುಕೊರತೆಗಳ ನಿವಾರಣೆಯ ಉಪಕ್ರಮವನ್ನು (Grievance Redressal Mechanism) ಅಳವಡಿಸಿಕೊಳ್ಳಲಾಗುವುದು. |
| 8. | ಎನ್.ಐ.ಎನ್.ಸಿ (Not Issued Not Collected) ಪದ್ಧತಿ ಬದಲಾಗಿ ಪರ್ಯಾಯ ವ್ಯವಸ್ಥೆಯನ್ನು ಮಾಡಲಾಗುವುದು. | ಮೋಟಾರು ಕಾಯ್ದೆ ಅನ್ವಯ ಸಾರ್ವಜನಿಕ ಬಸ್ಸಿನಲ್ಲಿ ಪ್ರಯಾಣಿಸುವ ಪ್ರಯಾಣಿಕರಿಗೆ ಟಿಕೇಟ್ ನೀಡುವುದು ನಿರ್ವಾಹಕರ ಕರ್ತವ್ಯವಿರುತ್ತದೆ. ಅದೇ ರೀತಿ, ಟಿಕೇಟ್ ಪಡೆದು ಪ್ರಯಾಣಿಸುವುದು ಪ್ರಯಾಣಿಕರ ಕರ್ತವ್ಯವಿರುತ್ತದೆ. ಆದಾಗ್ಯೂ, Not Issued Not Collected ಪ್ರಕರಣಗಳನ್ನು ದಾಖಲಿಸುವುದು ಮತ್ತು ಅವುಗಳ ವಿಲೇವಾರಿ ಸಂಬಂದ ಪರಿಷ್ಕೃತ ನಿರ್ದೇಶನಗಳನ್ನು ಹೊರಡಿಸಲಾಗಿದೆ. |
| 9. | ವೇತನ ವಿಷಯಕ್ಕೆ ಸಂಬಂಧಿಸಿದಂತೆ ತೀರ್ಮಾನಿಸುವ ಸಂದರ್ಭದಲ್ಲಿ ಸಾರಿಗೆ ನೌಕರರು ಹಲವಾರು ಬೇಡಿಕೆಗಳನ್ನು ಇಟ್ಟಿದ್ದು, ಅದರಲ್ಲಿ 06ನೇ ವೇತನ ಆಯೋಗದ ಶಿಫಾರಸ್ಸುಗಳನ್ನು ಪರಿಗಣಿಸುವ ಕುರಿತು. | ವೇತನ ವಿಷಯಕ್ಕೆ ಸಂಬಂಧಿಸಿದಂತೆ, 6ನೇ ವೇತನ ಆಯೋಗದ ಕುರಿತು ಬಹಳಷ್ಟು ಪ್ರಮುಖ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿದ್ದು, ಪರಿಶೀಲಿಸಲಾಗುತ್ತಿದೆ. |

* * * * *